ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಆಲಮಟ್ಟಿ ಜಲಾಶಯದ ಬಗ್ಗೆ

ಶ್ರೀ ಕವಟಗಿಮಠ ಮಹಾಂತೇಶ ಮಲ್ಲಿಕಾರ್ಜುನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

1306 (1547) ಮಾನ್ಯ ಜಲಸಂಪನ್ಮೂಲ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಕೃಷ್ಣಾ ನ್ಯಾಯಾಧೀಕರಣ-2 ಐತೀರ್ಪು ಪ್ರಕಟವಾಗಿ ದಶಕವೇ ಕಳೆದರೂ ರಾಜ್ಯಕ್ಕೆ ಹಂಚಿಕೆಯಾದ ಆಲಮಟ್ಟಿ ಜಲಾಶಯದ ಸಂಪೂರ್ಣ ನೀರನ್ನು ರಾಜ್ಯ ಬಳಸಿಕೊಳ್ಳುವಲ್ಲಿ ವಿಫಲವಾಗಿರುವ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಹಾಗಿದ್ದಲ್ಲಿ, ನ್ಯಾಯಾಧೀಕರಣದ ತೀರ್ಪಿನಂತೆ ಆಲಮಟ್ಟಿ ಜಲಾಶಯದ ಎತ್ತರವನ್ನು 524.256 ಮೀ.ಗೆ. ಎತ್ತರಿಸಿ ರಾಜ್ಯಕ್ಕೆ ಹಂಚಿಕೆಯಾಗಿರುವ ಸಂಪೂರ್ಣ ನೀರನ್ನು ಬಳಸಿಕೊಂಡು ರಾಜ್ಯದ ರೈತರ ಲಕ್ಷಾಂತರ ಎಕರೆ ಭೂಮಿಗೆ ನೀರುಣಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ಐತೀರ್ಪಿನಂತೆ ರಾಜ್ಯಗಳ ನಡುವೆ ಆಲಮಟ್ಟಿ ಜಲಾಶಯದ ನೀರಿನ ಹಂಚಿಕೆಯ ಸಂಪೂರ್ಣ ವಿವರ ಒದಗಿಸುವುದು ; ಇದರಲ್ಲಿ ರಾಜ್ಯಕ್ಕೆ ಎಷ್ಟು ಟಿ.ಎಂ.ಸಿ. ನೀರು ಹಂಚಿಕೆಯಾಗಿದೆ; ಇದರಿಂದ ಎಷ್ಟು ಹೆಕ್ಟೇರ್ ರೈತರ ಜಮೀನು ನೀರಾವರಿಗೆ ಒಳಪಡಲಿದೆ ; ಸಂಪೂರ್ಣ ನೀರನ್ನು ಬಳಸಿಕೊಳ್ಳಲು ಸರ್ಕಾರವು ಹಮ್ಮಿಕೊಂಡಿರುವ ಕಾರ್ಯಕ್ರಮಗಳೇನು ; ಅವು ಯಾವ ಹಂತದಲ್ಲಿವೆ ; (ವಿವರ ನೀಡುವುದು)

(ಈ) ಐತೀರ್ಪಿನಂತೆ ಆಲಮಟ್ಟಿ ಜಲಾಶಯದ ಎತ್ತರವನ್ನು ಎತ್ತರಿಸಲು ಬೇಕಾಗುವ ಅಂದಾಜು ಅನುದಾನವೆಷ್ಟು ; ಬಿಡುಗಡೆಯಾದ ಅನುದಾನವೆಷ್ಟು ; (ವಿವರ ಒದಗಿಸುವುದು)

(ಉ) ಆಲಮಟ್ಟಿ ಜಲಾಶಯದ ಎತ್ತರವನ್ನು ಎತ್ತರಿಸುವುದರಿಂದ ಎಷ್ಟು ಗ್ರಾಮಗಳು ಮತ್ತು ಎಷ್ಟು ಭೂಪ್ರದೇಶ ಮುಳುಗಡೆಯಾಗಲಿದೆ ; ಅವುಗಳ ಸ್ಥಳಾಂತರಕ್ಕೆ ಹಾಗೂ ಪುನರ್ವಸತಿ ಕಲ್ಪಿಸಲು ತಗಲುವ ಅಂದಾಜು ವೆಚ್ಚವೆಷ್ಟು ; ಈ ಸಂಬಂಧ ಸರ್ಕಾರ ತೆಗೆದುಕೊಂಡ ಕ್ರಮಗಳೇನು ; (ವಿವರ ಒದಗಿಸುವುದು)

(ಊ) ಸದರಿ ಯೋಜನೆಯನ್ನು ರಾಷ್ಟ್ರೀಯ ಯೋಜನೆಯನ್ನಾಗಿ ಪರಿಗಣಿಸಿ ಇದಕ್ಕೆ ವಿಶ್ವ ಬ್ಯಾಂಕ್ ಅಥವಾ ಕೇಂದ್ರ ಸರ್ಕಾರದಿಂದ ಹಣಕಾಸು ನೆರವು ಪಡೆಯಲು ಸರ್ಕಾರ ಚಿಂತಿಸಿದೆಯೇ ; ಯಾವ ಕಾಲಮಿತಿಯಲ್ಲಿ ಸದರಿ ಯೋಜನೆಯು ಪೂರ್ಣಗೊಳ್ಳುವುದು?